# ಕೆರೆನ್ ಹಾರ್ನೈ (1885-1952)

## ಇಂದಿರಾ ಜೈಪ್ರಕಾಶ್



***

ಹಾರ್ನೈ 'ನವಫ್ರಾಯ್ಡ್ ಪಂಥೀಯರಲ್ಲಿ' ಪ್ರಮುಖಳು. ನವಫ್ರಾಯ್ಡ್ ಪಂಥೀಯರು ಸಿಗ್ಮಂಡ್ ಫ್ರಾಯ್ಡನ ಎಲ್ಲಾ ವಿಚಾರಗಳನ್ನೂ ಒಪ್ಪಿಕೊಳ್ಳದೆ ಅವನ ವ್ಯಕ್ತಿತ್ವ ಸಿದ್ಧಾಂತ ಮತ್ತು ಮನೋವಿಶ್ಲೇಷಣೆಯಲ್ಲಿ ಅನೇಕ ಮಾರ್ಪಾಡುಗಳನ್ನು ಮಾಡಿದ್ದರು. ಇಂತಹ ಸಿದ್ಧಾಂತಿಗಳಲ್ಲಿ ಪ್ರಮುಖಳಾದ ಹಾರ್ನೈ ಮನೋವಿಶ್ಲೇಷಕಿ ಮಾತ್ರವಲ್ಲದೆ ಮಹಿಳಾ ಮನೋವಿಜ್ಞಾನ ಕ್ಷೇತ್ರಕ್ಕೆ ಅಡಿಪಾಯ ಹಾಕಿದವಳು.

ಹಾರ್ನೈ ಜರ್ಮನಿಯ ಹಾಂಬರ್ಗ್ ಬಳಿ ಡೇನಿಯಲ್ಸನ್ ಎಂಬ ಪ್ರೊಟೆಸ್ಟೆಂಟರ ಕುಟುಂಬದಲ್ಲಿ ಹುಟ್ಟಿದಳು. ಅವಳ ಬಾಲ್ಯದ ಜೀವನ ಅಷ್ಟೇನೂ ಹಿತಕರವಾಗಿರಲಿಲ್ಲ. ಮಹಿಳೆಯರಿಗೆ ಉನ್ನತ ಶಿಕ್ಷಣಕ್ಕೆ ಅವಕಾಶ ವಿರಳವಾಗಿದ್ದ ಸಮಯದಲ್ಲಿ ಫ್ರೈಬರ್ಗ್, ಗೊಟ್ಟಿಗೆನ್ ಮತ್ತು ಬರ್ಲಿನ್ ವಿಶ್ವವಿದ್ಯಾಲಯಗಳಿಗೆ ಎಡತಾಕಿ ವೈದ್ಯಕೀಯ ಪದವಿಗಳಿಸಿದಳು. ಆಸ್ಕರ್ ಹಾರ್ನೈಯನ್ನು 1909 ರಲ್ಲಿ ಮದುವೆಯಾಗಿದ್ದಳು. 1926 ರಲ್ಲಿ ಅವರು ಬೇರೆಯಾದರೂ ವಿಚ್ಛೇದನ 1937 ರವರೆಗೂ ದೊರೆತಿರಲಿಲ್ಲ. ಕಾರ್ಲ ಅಬ್ರಹಾಂ ಎಂಬುವನ ಬಳಿ ಹಾರ್ನೈ ಮನೋವಿಶ್ಲೇಷಣೆಗೆ ಒಳಪಟ್ಟಿದ್ದಳು. 1920 ರಲ್ಲಿ ಬರ್ಲಿನ್ ಸೈಕೋಅನಾಲಿಟಿಕ್ ಸಂಸ್ಥೆಯನ್ನು (Berlin Psychoanalytical Institute) ಸ್ಥಾಪಿಸಲು ನೆರವಾದಳು. ಅಲ್ಲಿಯೇ 1932 ರವರೆಗೆ ಚಿಕಿತ್ಸಾ ಕಾರ್ಯ ನಡೆಸುತ್ತಿದ್ದು ಹಿಟ್ಲರನ ಕಾಟ ಜರ್ಮನಿಯಲ್ಲಿ ಜಾಸ್ತಿಯಾದಾಗ ಅಮೆರಿಕೆಗೆ ಬಂದಳು. ಆಗ ಅಮೆರಿಕೆಯ ಬ್ರೋಕ್‌ಲಿನ್‌ನಲ್ಲಿ ಜರ್ಮನಿಯಿಂದ ತಪ್ಪಿಸಿಕೊಂಡು ಬಂದಿದ್ದ ಯಹೂದಿಗಳ ದೊಡ್ಡ ಗುಂಪೇ ಇತ್ತು. ಇಲ್ಲಿ ನೆಲಸಿದವಳಿಗೆ ಸಲ್ಲಿವಾನ್, ಫ್ರಾಂ ಮುಂತಾದವರ ಸಂಪರ್ಕ ಬೆಳೆಯಿತು. ಇಲ್ಲಿಯೇ ಮನೋವಿಶ್ಲೇಷಣಾ ಸಂಸ್ಥೆಯಲ್ಲಿ ಕೆಲಕಾಲ ಕೆಲಸಮಾಡುತ್ತಿದ್ದಳು. ಫ್ರಾಯ್ಡನ ಸಿದ್ಧಾಂತಗಳನ್ನು ಸಾರಾಸಗಟಾಗಿ ಒಪ್ಪಿಕೊಳ್ಳದ ಕಾರಣ ಅಲ್ಲಿ ಬಿಕ್ಕಟ್ಟು ಉಂಟಾಯಿತು. ಅದನ್ನು ಬಿಟ್ಟು ನ್ಯೂಯಾರ್ಕ್ ಮೆಡಿಕಲ್ ಕಾಲೇಜು ಸೇರಿ ತನ್ನ ಮರಣದವರೆಗೂ ಅಲ್ಲೇ ಸೇವೆ ಸಲ್ಲಿಸಿದಳು.

ಫ್ರಾಯ್ಡ್ ಲೈಂಗಿಕತೆಗೆ ಒತ್ತು ಕೊಟ್ಟು ಹೆಣ್ಣಿನಲ್ಲಿ ಪುರುಷನಂತೆ ಶಿಶ್ನ ಇಲ್ಲದ್ದರಿಂದ 'ಶಿಶ್ನ ಮತ್ಸರ (Penis Envy)'ವಿರುತ್ತದೆ ಎಂದಿದ್ದ. ಅದಕ್ಕೆ ಹಾರ್ನೈ, ಗಂಡಿಗೆ ಜನ್ಮ ಕೊಡಲು ಆಸಾಧ್ಯವಾದದ್ದರಿಂದ ಅವನಲ್ಲಿ 'ಗರ್ಭ ಮತ್ಸರ (Womb Envy)' ಇರಬೇಕು ಎಂದು ಫ್ರಾಯ್ಡನಿಗೆ ಸವಾಲು ಹಾಕಿದ್ದಳು. ಆಗ ಪ್ರಬಲವಾಗಿದ್ದ ಫ್ರಾಯ್ಡನ ವಿಚಾರಧಾರೆಯನ್ನು ಪ್ರಶ್ನಿಸಿ

ಸಾಮಾಜಿಕ ಪ್ರಭಾವಗಳಿಗೆ ಒತ್ತು ನೀಡಿದ್ದಳು. ಸಂಸ್ಕೃತಿ ಮತ್ತು ಸಮಾಜ (culture and society) ಮನೋಬೇನೆಗಳಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಮಕ್ಕಳ ವ್ಯಕ್ತಿತ್ವ ವಿಕಾಸದಲ್ಲಿ ಪಾಲಕರ ಪಾತ್ರ ಹಿರಿದು. ಶಿಶುವಿಗೆ ಮಮತೆ, ಹಿತಕರ ವಾತಾವರಣ, ಪಾಲನೆ ಸಿಗದಿದ್ದಾಗ ಮೂಲಭೂತ ಆತಂಕ (Basic anxiety) ಬೆಳೆಯುತ್ತದೆ. ಜೈವಿಕ ಅಗತ್ಯಗಳಂತೆ, ಮಮತೆ ಮತ್ತು ಅಧಿಕಾರದ ಅಗತ್ಯಗಳೂ ಇರುತ್ತವೆ. ಇಂತಹ ಚಿಂತನೆಗಳನ್ನು ಇವಳು ತನ್ನ 'ನ್ಯೂರೋಟಿಕ್ ಪರ್ಸನಾಲಿಟಿ ಆಫ್ ಅವರ್ ಟೈಂ (Neurotic personality of our time)' ಕೃತಿಯಲ್ಲಿ ವಿವರಿಸಿದಳು.

ನ್ಯೂರೋಟಿಕ್ ನೀಡ್ಸ್ (Neurotic needs) ಎನ್ನುವ ಸಂಕಲ್ಪನೆಯನ್ನು ಹಾರ್ನೈ ಮನೋರೋಗಗಳನ್ನು ಅರ್ಥಮಾಡಿಕೊಳ್ಳಲು ಬಳಸಿದಳು. ಅಗತ್ಯಗಳನ್ನು 'ಜನಮುಖಿ (Moving toward people)', 'ಜನವಿರೋಧಿ (moving against people)' ಮತ್ತು 'ಜನವಿಮುಖಿ (moving away from people)' ಎಂದು ವರ್ಗೀಕರಿಸಿದಳು. ಜನಮುಖಿ ಎನ್ನುವುದು ಬೇರೆಯರನ್ನು ಒಲಿಸುವ, ಅವರ ಒಪ್ಪಿಗೆ ಪಡೆಯುವ, ಜೊತೆಗಾರರನ್ನು ಬಯಸುವ, ಸಮಾಜದಲ್ಲಿ ಮನ್ನಣೆಯ ಅಗತ್ಯಗಳ ಸಮೂಹ. ಜನವಿರೋಧಿ ಎನ್ನುವುದು ಅಧಿಕಾರದ ಆಸೆ, ಜನರನ್ನು ಬಳಸಿಕೊಳ್ಳುವುದು ಅವರನ್ನು ನಿಯಂತ್ರಿಸುವ ಅಗತ್ಯಗಳನ್ನು ಒಳಗೊಂಡು ಆಕ್ರಮಣ ಪ್ರವೃತ್ತಿಯನ್ನು ಸೂಚಿಸುತ್ತದೆ. ಜನವಿಮುಖಿ ಎನ್ನುವುದು ಜನರಿಂದ ಹಿಂದೆ ಸರಿದು ವೈಯುಕ್ತಿಕ ಸಾಧನೆ, ಸ್ವಾಯತ್ತತೆ, ಪರಿಪೂರ್ಣತೆಯ ಅಗತ್ಯವಲ್ಲದೆ ತನ್ನ ವ್ಯವಹಾರಗಳನ್ನು ಸಂಕುಚಿತಗೊಳಿಸಿ ಆದಷ್ಟೂ ಮರೆಯಲ್ಲೆ ಉಳಿಯುವ ಸ್ವಭಾವ ಬೆಳೆಸುತ್ತದೆ.

ಪ್ರಥಮ ಮಹಿಳಾ ಮನೋವೈದ್ಯೆಯಾಗಿದ್ದ ಹಾರ್ನಿ ಅವಳಿದ್ದ ಕಾಲದಲ್ಲಿ ಮಹಿಳೆಗೆ ರೂಪ ಮತ್ತು ತಾಯ್ತನ ಬಿಟ್ಟರೆ ಮಾನವರಿಗೆ ಅಗತ್ಯವಾದ ಸ್ವ-ವಾಸ್ತವೀಕರಣಕ್ಕೆ ಸಮಾಜ ಬೆಂಬಲಿಸುತ್ತಿಲ್ಲ ಎಂದು ಗಮನಿಸಿದಳು. ಪುರುಷ- ಸ್ತ್ರೀ ಇಬ್ಬರಿಗೂ ಸಫಲರಾಗಿ, ಸಕ್ಷಮರಾಗಿ ತಮ್ಮಲ್ಲಿನ ಗುಣಗಳನ್ನು ಪ್ರಕಟಿಸುವ ಅಗತ್ಯವಿರುತ್ತದೆ. ಅಬ್ರಹಾಂ ಮ್ಯಾಸ್ಲೋನಂತೆ ಇವಳು ಸ್ವ-ವಾಸ್ತವೀಕರಣದ ಸಂಕಲ್ಪನೆಯನ್ನು ಬಳಸಿದಳು. ನಮಗೆ ನಮ್ಮ 'ಸ್ವ'ದ ಸರಿಯಾದ ಅರಿವು ಇದ್ದರೆ ಆಗ ನಮ್ಮ ಅಂತಸ್ಸತ್ವವನ್ನು ಯಥಾರ್ಥಗೊಳಿಸಬಹುದು. 'ವಾಸ್ತವ-ಸ್ವ (Real Self)' ಎನ್ನುವುದು ನಾವು ಹೇಗಿದ್ದೇವೆ ಎನ್ನುವುದನ್ನು ತಿಳಿಸಿದರೆ 'ಆದರ್ಶ-ಸ್ವ (idealized self)' ನಾವು ಏನಾಗಲು ಬಯಸುತ್ತೇವೆ ಎನ್ನುವುದನ್ನು ತಿಳಿಸುತ್ತದೆ. ಮನೋಬೇನೆಯಿಂದ ಬಳಲುವವರು ಆದರ್ಶ ಸ್ವ ದ ಹಿಂದೆ ಬಿದ್ದು ತಮ್ಮ ವಾಸ್ತವ-ಸ್ವ ವನ್ನು ತಿರಸ್ಕರಿಸಿ ಪರಿಪೂರ್ಣತೆಯ ಹಂಬಲದಲ್ಲಿ ಸಮಸ್ಯೆಗೆ ಒಳಗಾಗುತ್ತಾರೆ.

ಹಾರ್ನೈ ಅನೇಕ ಕೃತಿಗಳನ್ನು ರಚಿಸಿದ್ದು ತೀವ್ರವಲ್ಲದ ಮಾನಸಿಕ ತೊಂದರೆಗಳನ್ನು ಜನರೇ ಪರಿಹರಿಸಿಕೊಳ್ಳಲು 'ಸೆಲ್ಫ್ ಹೆಲ್ಪ್ (Self Help)' ಪುಸ್ತಕ ಬರೆದಿದ್ದಳು. ತಮ್ಮನೇ ವಿಶ್ಲೇಷಿಸಿಕೊಳ್ಳಲು 'ಸ್ವಯಂ-ವಿಶ್ಲೇಷಣಾ' ವಿಧಾನ ಪ್ರಚುರಪಡಿಸಿದಳು. ಮಹಿಳೆಯರಿಗೆ ಧ್ವನಿ ಇಲ್ಲದ ಸಮಯದಲ್ಲಿ ಮಾನವತಾವಾದ, ಸ್ತ್ರೀವಾದ ಮತ್ತು ನವ ಮನೋವಿಶ್ಲೇಷಣೆಯ ಪ್ರವರ್ತಕಳಾದಳು. ಇವಳು ಮಹಿಳೆಯರ ಮನೋವಿಜ್ಞಾನದ ಬಗ್ಗೆ ಬರೆದಿದ್ದ ಲೇಖನಗಳನ್ನು ಸಂಗ್ರಹಿಸಿ 'ಫೆಮಿನೈನ್ ಸೈಕಾಲಜಿ (Feminine Psychology)' ಎಂಬ ಹೊತ್ತಿಗೆ ಪ್ರಕಟವಾಯಿತು. ಇವಳ ನೆನಪಿನಲ್ಲಿ ನ್ಯೂಯಾರ್ಕ್ನಲ್ಲಿ 1955 ರಲ್ಲಿ 'ಕೆರೆನ್ ಹಾರ್ನಿ ಕ್ಲಿನಿಕ್' ತೆರೆಯಲಾಯಿತು. ಇದು ಮನೊವೈದ್ಯಕೀಯ ತರಬೇತಿ ನೀಡುವುದಲ್ಲದೆ ಅಗತ್ಯವಿರುವವರಿಗೆ ಕಡಿಮೆ ವೆಚ್ಚದಲ್ಲಿ ಮನೋಚಿಕಿತ್ಸೆ ಒದಗಿಸುವ ಕೇಂದ್ರವಾಗಿದೆ.

***